ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ಸಂಚಾರಿ ಪೊಲೀಸರು ವಾಹನ ಸವಾರರಿಂದ ದಂಡ ಸಂಗ್ರಹಿಸುತ್ತಿರುವ ಕುರಿತು

ಶ್ರೀ ಹೆಚ್.ಎಂ. ರೇವಣ್ಣ (ವಿಧಾನ ಸಭೆಯಿಂದ ಚುನಾಯಿತರಾದವರು ) :-

1238 (1496) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಬೆಂಗಳೂರು ನಗರ ಸಂಚಾರಿ ಪೊಲೀಸರು ವಾಹನ ಸವಾರರಿಂದ ಸಂಚಾರಿ ನಿಯಮ ಉಲ್ಲಂಘನೆಗಳಿಂದ ಸ್ಥಳದಲ್ಲೇ ಸಂಗ್ರಹಿಸಿದ ದಂಡದ ಹಣವಷ್ಟು ; (2018-19 ಮತ್ತು 2019-2020ನೇ ಸಾಲಿನಿಂದ ಠಾಣಾವಾರು ವಿವರ ನೀಡುವುದು)

(ಆ) ಬೆಂಗಳೂರು ನಗರ ಸಂಚಾರಿ ಪೊಲೀಸರು ಸ್ಥಳ ದಂಡದಿಂದ ಸಂಗ್ರಹಿಸಿದ ಹಣವನ್ನು ಸರ್ಕಾರಕ್ಕೆ ಪೂರ್ಣವಾಗಿ ಜಮಾ ಮಾಡಲಾಗಿದೆಯೇ ; (ಠಾಣಾವಾರು ವಿವರಗಳನ್ನು ನೀಡುವುದು)

(ಇ) 2018-1019 ಮತ್ತು 2019-2020ನೇ ಸಾಲಿನ ಅವಧಿಯಲ್ಲಿ ಪೊಲೀಸ್ ಪ್ರಧಾನ ಕಛೇರಿಯಿಂದ ಆಂತರಿಕ ಲೆಕ್ಕಪರಿಶೋಧನೆ ಕೈಗೊಳ್ಳಲಾಗಿದೆಯೇ; ಲೆಕ್ಕ ಪರಿಶೋಧನಾ ತಂಡದ ತಪಾಸಣೆ ವರದಿ ಪ್ರಕಾರ ಸ್ಥಳದಂಡ ವಸೂಲಾದ ಮರುದಿನ (ರಜಾ ದಿನ ಹೊರತುಪಡಿಸಿ) ಜಮಾ ಮಾಡದೆ ಸರ್ಕಾರದ ಹಣ ದುರುಪಯೋಗ ಪಡಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; (ಠಾಣಾವಾರು ಸರ್ಕಾರಕ್ಕೆ ಜಮಾ ಮಾಡಿದ ದಿನಾಂಕದೊಂದಿಗೆ ರಸೀದಿ/ಚಲನ್ ಸಂಖ್ಯೆ/ವಿವರಗಳನ್ನು ನೀಡುವುದು)

(ಈ) ಆಡಿಟ್ ವರದಿಯ ಅನ್ವಯ ದುರುಪಯೋಗ ಪಡಿಸಿಕೊಂಡ ಪ್ರಕರಣಗಳಲ್ಲಿ ಸಂಬಂಧಪಟ್ಟ ಅಧಿಕಾರಿಗಳ ವಿರುದ್ಧ ಅಪರಾಧ ಮೊಕದ್ದಮೆ ದಾಖಲಾಗಿದೆಯೇ; ಮೊಕದ್ದಮೆ ದಾಖಲಿಸದಿದ್ದಲ್ಲಿ ದಾಖಲಿಸದಿರಲು ಕಾರಣವೇನು ?